# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 325
ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 12-07-2018
ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಅನೇಕ ಕಡೆಗಳಲ್ಲಿ ಶಿಥಿಲವಾದ ಹಾಗೂ ಅಪಾಯಕಾರಿ ಕಟ್ಟಡಗಳಲ್ಲಿ ಸರ್ಕಾರಿ ಶಾಲೆಗಳು ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಆ ರೀತಿ ಎಷ್ಟು ಶಾಲೆಗಳನ್ನು ಗುರುತಿಸಲಾಗಿದೆ; | ಬಂದಿದೆ.<br><br>ರಾಜ್ಯದ 5588 ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ 10258 ಕೊಠಡಿಗಳು ಹಾಗೂ 264 ಸರ್ಕಾರಿ ಪ್ರೌಢ ಶಾಲೆಗಳಲ್ಲಿ 949 ಕೊಠಡಿಗಳು ಶಿಥಿಲಗೊಂಡಿರುತ್ತವೆ. |
| (ಆ) | ಶಿಕ್ಷಕರು ಮತ್ತು ಮಕ್ಕಳು ಇಂತಹ ಶಾಲೆಗಳಲ್ಲಿ ಅಪಾಯಕಾರಿ ಪರಿಸ್ಥಿತಿಯಲ್ಲಿರುವುದರಿಂದ ಕೂಡಲೇ ದುರಸ್ತಿ ಕಾರ್ಯ ಕೈಗೊಳ್ಳಲು ಸರ್ಕಾರ ಕ್ರಮ ಕೈಗೊಳ್ಳುತ್ತದೆಯೇ; | ಶಿಥಿಲಾವಸ್ಥೆಯಲ್ಲಿರುವ ಕಟ್ಟಡಗಳನ್ನು ದುರಸ್ಥಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| (ಇ) | ಸಮರೋಪಾದಿಯಲ್ಲಿ ದುರಸ್ತಿ ಅಥವಾ ಹೊಸ ಕಟ್ಟಡ ನಿರ್ಮಾಣದ ಬಗ್ಗೆ ಸರ್ಕಾರ ಕಾರ್ಯಕ್ರಮ ರೂಪಿಸುತ್ತದೆಯೇ; ಈ ದಿಸೆಯಲ್ಲಿ ಸರ್ಕಾರದ ನಿಲುವೇನು? | 2017-18ನೇ ಸಾಲಿನಲ್ಲಿ, 672 ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಶಿಥಿಲಗೊಂಡ 760 ಕೊಠಡಿಗಳ ಮರು ನಿರ್ಮಾಣಕ್ಕಾಗಿ ರೂ.6604.95 ಲಕ್ಷ ಹಾಗೂ 238 ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಶಿಥಿಲಗೊಂಡ 312 ಕೊಠಡಿಗಳ ಮರು ನಿರ್ಮಾಣಕ್ಕಾಗಿ ರೂ.4132.80 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>2017-18ನೇ ಸಾಲಿನಲ್ಲಿ, 1338 ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ 1338 ಕೊಠಡಿಗಳ ದುರಸ್ಥಿಗಾಗಿ ರೂ.2866.00 ಲಕ್ಷ ಹಾಗೂ 777 ಸರ್ಕಾರಿ ಪ್ರೌಢ ಶಾಲೆಗಳಲ್ಲಿ 777 ಕೊಠಡಿಗಳ ದುರಸ್ಥಿಗಾಗಿ ರೂ.3500.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>2018-19ನೇ ಸಾಲಿನ ಆಯವ್ಯಯದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ಹಂಚಿಕೆಯಾದ ಅನುದಾನದ ಲಭ್ಯತೆ ಆಧರಿಸಿ, ಸರ್ಕಾರಿ ಶಾಲೆಗಳ ಕೊಠಡಿ ದುರಸ್ಥಿ, ಶಿಥಿಲಗೊಂಡ ಕೊಠಡಿ/ಕಟ್ಟಡಗಳ ಮರು ನಿರ್ಮಾಣಕ್ಕಾಗಿ ಆದ್ಯತೆ ಮೇರೆಗೆ ಹಂತ-ಹಂತವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. |

ಇಡಿ 202 ಯೋಸಕ 2018

(ಎನ್. ಮಹೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು